ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಬುಧವಾರ, ದಿನಾಂಕ : 03 ನೇ ಫೆಬ್ರುವರಿ, 2021

ಸರಕಾರಿ ಜಾಗದಲ್ಲಿರುವ ಅಕ್ರಮ ರೆಸಾರ್ಟ್‌ಗಳ ಕುರಿತು

ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು)

324 (316) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಮನಗರ ಜಿಲ್ಲೆ ಬಿಡದಿ ಹೋಬಳಿ ಶಾನಮಂಗಲ ಬಿಲ್ಲಕೆಂಪನ ಹಳ್ಳಿ ಮತ್ತು ಬಾನಂದೂರು ಗ್ರಾಮಗಳಲ್ಲಿ ಸರಕಾರದ 106 ಎಕರೆ 12 ಗುಂಟೆ ಜಮೀನು ಒತ್ತುವರಿಯಾಗಿರುವುದು ಸರಕಾರದ ಗಮನಕ್ಕೆ ಬಂದಿದೆಯೇ; ಒತ್ತುವರಿ ತೆರವುಗೊಳಿಸಲು ಸರಕಾರ ಯಾವ ಕ್ರಮಗಳನ್ನು ಕೈಗೊಂಡಿದೆ;

(ಆ) ಸರಕಾರಿ ಜಾಗವನ್ನು ಒತ್ತವರಿ ಮಾಡಿಕೊಂಡು ರೆಸಾರ್ಟ್ ನಿರ್ಮಿಸಿದಲ್ಲಿ ಅಲ್ಲಿ ಯಾವ ನಿಯಮಗಳ ಅನ್ವಯ ವ್ಯವಹಾರಕ್ಕೆ ಅನುಮತಿ ನೀಡಲಾಗಿದೆ;

(ಇ) ಅಕ್ರಮವಾಗಿ ಒತ್ತುವರಿ ಮಾಡಿದ ಜಾಗದಲ್ಲಿ ವ್ಯವಹಾರಗಳನ್ನು ಮಾಡುತ್ತಿರುವ ರೆಸಾರ್ಟ್‌ಗಳನ್ನು ಬಂದ್ ಮಾಡುವ ಕುರಿತು ಸರಕಾರದ ನಿಲುವೇನು; ಕಳೆದ ಎರಡು ವರ್ಷಗಳಲ್ಲಿ ಎಷ್ಟು ರೆÀಸಾರ್ಟ್‌ಗಳನ್ನು ಬಂದ್ ಮಾಡಲಾಗಿದೆ?